# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1167 (1191) |
| ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 16-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ಸಕ್ಕರೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1. | ಕಳೆದ ಮೂರು ವರ್ಷಗಳಲ್ಲಿ ಪೌರಕಾರ್ಮಿಕ ಗೃಹಭಾಗ್ಯ ಯೋಜನೆಯ ಅನ್ವಯ ನಗರಾಭಿವೃದ್ಧಿ ಇಲಾಖೆಯಿಂದ ಎಷ್ಟು ಮನೆಗಳನ್ನು ನಿರ್ಮಿಸಲಾಗಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಪೌರ ಕಾರ್ಮಿಕ ಗೃಹಭಾಗ್ಯ ಯೋಜನೆಯಡಿ ನಿರ್ಮಿಸಲಾದ ಮನೆಗಳ ವಿವರಗಳನ್ನು ಜಿಲ್ಲಾವಾರು ಅನುಬಂಧ-1ರಲ್ಲಿ ಲಗತ್ತಿಸಿದೆ. |
| 2. | 2014-2018 ರ ಅವಧಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಗೃಹಭಾಗ್ಯ ಯೋಜನೆಯ ಜಾರಿಗೆ ಬಿಡುಗಡೆ ಮಾಡಿದ ಮೊತ್ತದಲ್ಲಿ ರೂ.50.47 ಕೋಟಿಗೂ ಹೆಚ್ಚು ಹಣವನ್ನು ವಿವಿಧ ಬ್ಯಾಂಕ್‌ಗಳಲ್ಲಿ ಡಿಪಾಸಿಟ್ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪೌರಕಾರ್ಮಿಕರ ಗೃಹಭಾಗ್ಯ ಯೋಜನೆಯ ಅನುಷ್ಠಾನದ ಅನುದಾನವನ್ನು ಸ್ಥಳೀಯ ಸಂಸ್ಥೆಗಳಲ್ಲಿ ಪ್ರತ್ಯೇಕವಾಗಿ ತೆರೆಯಲಾಗಿರುವ ಬ್ಯಾಂಕ್ ಉಳಿತಾಯ ಖಾತೆಗೆ ಬಿಡುಗಡೆ ಮಾಡಲಾಗುತ್ತಿದೆ. |
| 3. | ಸರ್ಕಾರದಿಂದ ಬಿಡುಗಡೆ ಮಾಡಿದ ಮೊತ್ತವನ್ನು ಸಮರ್ಪಕವಾಗಿ ನಿಗಧಿಪಡಿಸಿದ ಯೋಜನೆಗೆ ಬಳಸದೇ ದುರಪಯೋಗ ಪಡಿಸಿದ ಅಧಿಕಾರಿ ಮೇಲೆ ಯಾವಕ್ರಮ ಕೈಗೊಳ್ಳಲಾಗಿದೆ; ಡಿಪಾಸಿಟ್ ಮಾಡಿರುವ ಮೊತ್ತಕ್ಕೆ ಬಂದ ಬಡ್ಡಿ ಎಷ್ಟು; ಅದನ್ನು ಯಾವ ರೀತಿಯಾಗಿ ಬಳಸಿಕೊಳ್ಳಲಾಗಿದೆ. | ಯೋಜನೆಗೆ ಬಿಡುಗಡೆಯಾದ ಅನುದಾನದ ದುರಪಯೋಗ ಪ್ರಕರಣ ಕಂಡುಬಂದಲ್ಲಿ ಅಂತಹ ಅಧಿಕಾರಿಗಳ ವಿರುದ್ಧ ನಿಯಮಾನುಸಾರ ಕ್ರಮ ವಹಿಸಲಾಗುವುದು.<br><br>2014-2018ರ ಅವಧಿಯಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಪ್ರತ್ಯೇಕ ಬ್ಯಾಂಕ್ ಉಳಿತಾಯ ಖಾತೆಯಿಂದ ಗಳಿಸಿದ ಬಡ್ಡಿ ಮೊತ್ತ ರೂ.653.28 ಲಕ್ಷಗಳ ಗಳಿಸಿದ್ದು, ಈ ಮೊತ್ತವನ್ನು ರಾಜ್ಯದ ರಾಜಸ್ವ ಲೆಕ್ಕ ಶೀರ್ಷಿಕೆಗೆ ಜಮೆ ಮಾಡಲಾಗುವುದು. |

ಕಡತ ಸಂಖ್ಯೆ:ನಅಇ 151 ಎಸ್.ಎಫ್.ಸಿ 2021

N. Nagaraj

**(ಎನ್. ನಾಗರಾಜ್, ಎಂ.ಟಿ.ಬಿ)**

ಪೌರಾಡಳಿತ ಹಾಗೂ ಸಕ್ಕರೆ ಸಚಿವರು